## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1269(1138)
ಸದಸ್ಯರ ಹೆಸರು : ಶ್ರೀ ಬಿ.ಜಿ ಪಾಟೀಲ್
ಉತ್ತರಿಸುವ ದಿನಾಂಕ : 08.03.2022
ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಲಬುರಗಿ ಮಹಾನಗರ ಪಾಲಿಕೆಯಲ್ಲಿ ಸಂಗ್ರಹಿಸಲಾದ ತ್ಯಾಜ್ಯವನ್ನು ಯಾವ ಸಂಸ್ಥೆಯಿಂದ ನಿರ್ವಹಣೆ ಮಾಡಲಾಗುತ್ತಿದೆ; ಯಾವ ಸಂಸ್ಥೆಗೆ ಟೆಂಡರ್ ನೀಡಲಾಗಿದೆ; ಟೆಂಡರ್ ಅವಧಿ ಎಷ್ಟು; ಪ್ರಸ್ತುತ ಕಲಬುರಗಿ ಮಹಾನಗರ ಪಾಲಿಕೆಯಲ್ಲಿ ಸಂಗ್ರಹಿಸಲಾಗುತ್ತಿರುವ ದಿನ ನಿತ್ಯ ತ್ಯಾಜ್ಯದ ಪ್ರಮಾಣ ಎಷ್ಟು; (ವಿವರ ನೀಡುವುದು) | ಕಲಬುರಗಿ ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಉತ್ಪಾದನೆಯಾಗುವ ತ್ಯಾಜ್ಯದ ವಿಲೇವಾರಿಗಾಗಿ ನಗರದ 55 ವಾರ್ಡಗಳನ್ನು 11 ಪ್ಯಾಕೇಜ್‌ಗಳಾಗಿ ವಿಂಗಡಿಸಲಾಗಿರುತ್ತದೆ. ಈ ಪೈಕಿ 10 ಪ್ಯಾಕೇಜ್‌ಗಳಿಗೆ ದಿನಾಂಕ:29.08.2016ರಲ್ಲಿ ಟೆಂಡರ್ (ಮಾನವ ಸಂಪನ್ಮೂಲ ಹಾಗೂ ತ್ಯಾಜ್ಯ ವಿಲೇವಾರಿಗಾಗಿ) ಆಹ್ವಾನಿಸಿ, ಅರ್ಹ ಬಿಡ್‌ದಾರರಿಗೆ ನಗರದ ತ್ಯಾಜ್ಯದ ವಿಲೇವಾರಿ ಕಾರ್ಯವನ್ನು 12.10.2017, 21.10.2017 & 25.10.2017 ರಿಂದ ಒಂದು ವರ್ಷದ ಅವಧಿಗೆ ವಹಿಸಲಾಗಿರುತ್ತದೆ ಹಾಗೂ 11 ನೇ ಪ್ಯಾಕೇಜ್‌ನ ವ್ಯಾಪ್ತಿಯಲ್ಲಿ ಬರುವ ವಾರ್ಡಗಳ ತ್ಯಾಜ್ಯ ವಿಲೇವಾರಿ ಕಾರ್ಯವನ್ನು ಸ್ವತಃ ಪಾಲಿಕೆಯು ಖಾಯಂ ಪೌರಕಾರ್ಮಿಕರಿಂದ ನಿರ್ವಹಿಸುತ್ತಿದೆ.<br><br>**ಗುತ್ತಿಗೆದಾರರ ಹೆಸರು ಮತ್ತು ವಿಳಾಸ**<br><br>1. ಶ್ರೀ. ಗಣೇಶ ಶಂಕರ, ಮೆ॥ ಎನ್ವಿರಾನ್ಮೆಂಟಲ್ ಪ್ರೈ.ಲಿ. ಪ್ಯಾಕೇಜ್‌ಸಂಖ್ಯೆ-1,5,7.ಶ್ರೀಹರಿ ನಿಲಯಂ, ಸಂ:37, 8ನೇ ಅಡ್ಡ ರಸ್ತೆ ಕೆ.ಜಿ.ಎ ಲೆಔಟ್, ಆರ್‌ಎಮ್‌ವಿ 2ನೇ ಸ್ಟೇಜ್ ಬೆಂಗಳೂರು-560097 ಮೋ. ಸಂ:9743858889.<br><br>2. ಶ್ರೀ ಗುರುಶಾಂತಪ್ಪಾ ತೋಳೆ. ಪ್ಯಾಕೇಜ್ ಸಂಖ್ಯೆ-2, 3. ಎಲ್‌ಐಜಿ-23, 2ನೇ ಫೇಸ್, ಆದರ್ಶನಗರ, ಕಲಬುರಗಿ ಮೋ.ಸಂ:9902655642<br><br>3. ಮೇ. ಬಿ.ವಿ.ಜಿ. ಇಂಡಿಯಾ ಲೀ. ಪ್ಯಾಕೇಜ್ ಸಂಖ್ಯೆ-4. ಸಂ:47, 2 ಮತ್ತು 3 ನೇ ಮಹಡಿ ಮಿಲ್ಲರ್ಸ್ ಟ್ಯಾಂಕ್ ಬಂಡ್ ರಸ್ತೆ ವಸಂತ್‌ನಗರ ಬೆಂಗಳೂರು, ಮೋ.ಸಂ:9035119256<br><br>4. ಶ್ರೀ ಬಿ.ಎ. ಪೂಜಾರಿ. ಪ್ಯಾಕೇಜ್ ಸಂಖ್ಯೆ-6, 9, 10. ಮನೆ ಸಂ:455, ವಿಜಯಪುರ ಮೊ.ಸಂ:9538446666<br><br>5. ಶ್ರೀ ಜೀವನ್‌ಕುಮಾರ್ ಸನ್‌ಬಾಳ್. ಪ್ಯಾಕೇಜ್ ಸಂಖ್ಯೆ-8. ಮನೆ ಸಂ: 1-1252, ಗುಲಾಬ್‌ವಾಡಿ, ವಿಜಯ ವಿದ್ಯಾಲಯ ಹೈಸ್ಕೂಲ್ ಹತ್ತಿರ, ಐವಾನ್ ಶಾಹಿ ರಸ್ತೆ ಕಲಬುರಗಿ, ಮೋ.ಸಂ:9845712540.<br><br>**ಸರ್ಕಾರದ ಆದೇಶ ಸಂ: ನಅಇ 126 ಟಿಎಂಎಸ್ 2016, ಬೆಂಗಳೂರು, ದಿನಾಂ: 07.08.2017** ರ ಅಂಶ ಸಂ.(ಊ)ರಂತೆ ಮಹಾನಗರ ಪಾಲಿಕೆಗಳು ಸ್ವಚ್ಛತಾ ಕಾರ್ಯವನ್ನು ಹೊರಗುತ್ತಿಗೆ |

| | | |
|---|---|---|
| | | ಮೂಲಕ ನಿರ್ವಹಿಸುವದನ್ನು ಸ್ಥಗಿತಗೊಳಿಸಿ, ಪ್ರಸ್ತುತ ಸ್ವಚ್ಛತಾ ಕಾರ್ಯವನ್ನು ಟೆಂಡರ್/ಒಪ್ಪಂದದ ಮುಖಾಂತರ ನಿರ್ವಹಿಸುತ್ತಿರುವ ಗುತ್ತಿಗೆದಾರರ/ಸಂಸ್ಥೆಗಳ ಒಪ್ಪಂದವನ್ನು ಚಾಲ್ತಿ ಅವಧಿಯವರೆಗೆ ಮಾತ್ರ ಮುಂದುವರೆಸುವದು ತದನಂತರ ಸ್ವಚ್ಛತಾ ಕಾರ್ಯಗಳಿಗಾಗಿ ಟೆಂಡರ್‌ನ್ನು ಮುಂದುವರೆಸುವದಾಗಲಿ ಅಥವಾ **ಮರು-ಟೆಂಡರ್ ಕರೆಯುವದನ್ನಾಗಲಿ ಮಾಡುವಂತಿಲ್ಲವೆಂದು ಆದೇಶಿಸಲಾಗಿರುತ್ತದೆ.**<br><br>ಸರ್ಕಾರದ ಅಧಿಸೂಚನೆ ಸಂಖ್ಯೆ : ನಅಇ/129/ಎಂಎಂಇ/2017 ದಿನಾಂಕ:05-12-2017ರಂತೆ ಹೊರಡಿಸಲಾದ ನೇಮಕಾತಿ ಷರತ್ತುಗಳನ್ವಯ ಮಾನ್ಯ ಜಿಲ್ಲಾಧಿ ಕಾರಿಗಳ ಕಾರ್ಯಲಯದಿಂದ ಪೌರಕಾರ್ಮಿಕರ ನೇರ ನೇಮಕಾತಿಗಾಗಿ ಹೊರಡಿಸಲಾದ ಅಧಿಸೂಚನೆ ಸಂಖ್ಯೆ:ಜಿನಕೋ/ಸಿಬ್ಬಂದಿ-2/234/2017-18 ದಿ:22.02.2018 ರನ್ವಯ ಪೌರಕಾರ್ಮಿಕರ ನೇರ ನೇಮಕಾತಿ ಪ್ರಕ್ರೀಯೆ ಅರ್ಜಿ ಆಹ್ವಾನಿಸಲಾಗಿರುತ್ತದೆ. ಈಗಾಗಲೇ ನೇರ ನೇಮಕಾತಿ ಪ್ರಾಧಿಕಾರವು ತಾತ್ಕಾಲಿಕ ಪಟ್ಟಿಯನ್ನು ಬಿಡುಗಡೆಗೊಳಿಸಿರುತ್ತದೆ. ಸದರಿ ಪಟ್ಟಿಗೆ ಆಕ್ಷೇಪಣೆಗಳು ಆಗಮಿಸಿದ್ದು, ಆಕ್ಷೇಪಣೆಗಳನ್ನು ಬಗೆಹರಿಸುವ ಹಂತದಲ್ಲಿರುತ್ತವೆ. ನೇರ ನೇಮಕಾತಿ ಪ್ರಕ್ರಿಯೆ ಪೂರ್ಣಗೊಂಡ ನಂತರ ಪ್ಯಾಕೇಜ್‌ಗಳನ್ನು ರದ್ದುಗೊಳಿಸಲಾಗುವುದು.<br><br>ಆದರೆ ಪ್ರತಿ ನಿತ್ಯ ನಗರದ ನೈರ್ಮಲೀಕರಣ ಕಾರ್ಯವನ್ನು ಮಾಡಲೇಬೇಕಾಗಿರುವ ಕಾರಣದಿಂದ, ಸಾರ್ವಜನಿಕರ ಆರೋಗ್ಯದ ಹಿತ ದೃಷ್ಟಿಯಿಂದ ಸದರಿ ಗುತ್ತಿಗೆದಾರರ ಕಾರ್ಯಾವಧಿಯನ್ನೆ ಮುಂದುವರೆಸಿಕೊಂಡು ಬರಲಾಗುತ್ತಿದೆ. ಕಲ್ಬುರ್ಗಿ ನಗರದಲ್ಲಿ ಪ್ರತಿನಿತ್ಯ ಸುಮಾರು 247 ಟನ್‌ಗಳಷ್ಟು ತ್ಯಾಜ್ಯ ಉತ್ಪಾದನೆಯಾಗುತ್ತಿದೆ. |
| (ಆ) | ಸಂಗ್ರಹಿಲಾದ ತ್ಯಾಜ್ಯವನ್ನು ವೈಜ್ಞಾನಿಕವಾಗಿ ಸಂಸ್ಕರಣೆ ಮಾಡಲಾಗುತ್ತಿದೆಯೇ; ಇಲ್ಲವಾದ್ದಲ್ಲಿ; ಯಾವ ಕ್ರಮದಲ್ಲಿ ವಿಲೇವಾರಿ ಮಾಡಲಾಗುತ್ತಿದೆ ? (ವಿವರ ನೀಡುವುದು) | ಕಲ್ಬುರ್ಗಿ ನಗರದಲ್ಲಿ ಪ್ರತಿನಿತ್ಯ ಉತ್ಪಾದನೆಯಾಗುವ ತ್ಯಾಜ್ಯವನ್ನು ಸಂಗ್ರಹಿಸುವ ಸಂದರ್ಭದಲ್ಲಿ ಕಸವನ್ನು ಮನೆಗಳ ಹಂತಗಳಲ್ಲಿಯೇ ವಿಂಗಡಿಸಿಕೊಳ್ಳಲಾಗುವದು, ಹಸಿ ಕಸವನ್ನು ಕಾಂಪೋಸ್ಟ್ ಮಾಡಲಾಗುತ್ತಿದ್ದು, ಪ್ರತಿ ನಿತ್ಯ ಸುಮಾರು 80 ಟನ್‌ಗಳಷ್ಟು ಹಸಿ ಕಸವನ್ನು ಪೈಪ್ ಕಾಂಪೋಸ್ಟ್, ಪೀಟ್ ಕಾಂಪೋಸ್ಟ್ ಹಾಗೂ Windrow Compost ಮೂಲಕ ಕಾಂಪೋಸ್ಟ್ ಮಾಡಲಾಗುತ್ತಿದೆ. ಪ್ರಸ್ತುತ ಸುಮಾರು 16 ಟನ್‌ಗಳಷ್ಟು ಒಣ ಕಸವನ್ನು Decentralized Dry waste collection center ನಲ್ಲಿ ಸಂಸ್ಕರಿಸಲಾಗುತ್ತಿದೆ ಹಾಗೂ ಸುಮಾರು 39 ಟನ್‌ಗಳಷ್ಟು ಒಣಕಸವನ್ನು MRF center ನಲ್ಲಿ ಸಂಗ್ರಹಿಸಿ ಮರುಬಳಕೆಗೆ ಯೋಗ್ಯವಾದಂತಹವುಗಳನ್ನು ವಿಂಗಡಿಸಲು ಕ್ರಮವಹಿಸಲಾಗಿದೆ. ಸುಮಾರು 1.5 ಟನ್‌ಗಳಷ್ಟು ಬಯೋ ಮೇಡಿಕಲ್ ತ್ಯಾಜ್ಯವನ್ನು ಬೃಂದಾವನ ಸಂಸ್ಥೆಗೆ ಹಸ್ತಾಂತರಿಸಲಾಗುತ್ತಿದೆ.<br><br>ಉಳಿದಂತೆ 04 Decentralized Dry Waste Collection Center (DWCC)ಗಳ ಅಭಿವೃದ್ಧಿ ಕಾಮಗಾರಿಯು ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಪ್ರತಿ |

| | | |
|---|---|---|
| | | DWCC 4-6 ಟನ್ ಸಾಮರ್ಥ್ಯ ಹೊಂದಿರುತ್ತದೆ.<br><br>ಇದರೊಂದಿಗೆ ಪಾಲಿಕೆಯು ಎರಡು Organic Compost Machine ಗಳನ್ನು ಹೊಂದಿದ್ದು, ಸದರಿ ಯಂತ್ರಗಳು ಪ್ರತಿ ನಿತ್ಯ 1ಟನ್ ತ್ಯಾಜ್ಯವನ್ನು ಸಂಸ್ಕರಿಸುವ ಸಾಮರ್ಥ್ಯವನ್ನು ಹೊಂದಿರುತ್ತದೆ.<br><br>ನೆಲಭರ್ತಿ ಸ್ಥಳದಲ್ಲಿ 290 ಟನ್ ಸಾಮರ್ಥ್ಯದ ತ್ಯಾಜ್ಯ ಸಂಸ್ಕರಣೆ ಘಟಕದ ಸಿವಿಲ್ ಕಾಮಗಾರಿಗಳ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದ್ದು, ಸದರಿ ಕಾರ್ಯಗಳ ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಶೀಘ್ರವೆ ನೆಲಭರ್ತಿ ಸ್ಥಳದಲ್ಲಿ ವೈಜ್ಞಾನಿಕ ಸಂಸ್ಕರಣೆ ಆರಂಭಿಸಲಾಗುವದು.<br><br>ಸುಮಾರು 15 ವರ್ಷಗಳಿಂದ ನೆಲಭರ್ತಿ ಸ್ಥಳದಲ್ಲಿ ಸಂಗ್ರಹಿತವಾದ Legacy Waste ವಿಲೇವಾರಿ (Bio Remediation) ಕಾರ್ಯಕ್ಕಾಗಿ ವಿಸ್ತೃತ ವರದಿಯನ್ನು ತಯಾರಿಸಲಾಗುತ್ತಿದೆ. |

<u>ಕಡತ</u> ಸಂಖ್ಯೆ:ನಅಇ 09 ಎಸಿಜಿ 2022(ಇ)

(ಬಿ.ಎ ಬಸವರಾಜ)
ನಗರಾಭಿವೃದ್ಧಿ ಇಲಾಖೆ

**(ಬಿ.ಎ. ಬಸವರಾಜ)**
**ನಗರಾಭಿವೃದ್ಧಿ ಸಚಿವರು**